# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 448(546)

2) ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

3) ಉತ್ತರಿಸುವ ದಿನಾಂಕ : 09-03-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಆನೆಗಳ ದಾಳಿ ನಡೆಯುತ್ತಿರುತ್ತದೆ; | ರಾಜ್ಯದ ಮೈಸೂರು, ಕೊಡಗು, ಹಾಸನ, ಚಿಕ್ಕಮಗಳೂರು, ಚಾಮರಾಜನಗರ, ರಾಮನಗರ, ತುಮಕೂರು, ಶಿವಮೊಗ್ಗ ಮತ್ತು ಕೋಲಾರ ಜಿಲ್ಲೆಗಳಲ್ಲಿ ಆನೆಗಳ ಹಾವಳಿ ನಡೆಯುತ್ತಿರುತ್ತದೆ. |
| ಆ) | ಕಳೆದ 3 ವರ್ಷಗಳಲ್ಲಿ ಆನೆಗಳ ಹಾವಳಿಯಿಂದ ಮೃತಪಟ್ಟವರ ಸಂಖ್ಯೆ ಎಷ್ಟು; ಅವರಿಗೆ ನೀಡಿರುವ ಪರಿಹಾರ ಧನ ಎಷ್ಟು; ಆಗಿರುವ ಬೆಳೆ ನಷ್ಟ ಎಷ್ಟು; ಬೆಳೆ ನಷ್ಟ ಉಂಟಾದ ರೈತರಿಗೆ ಪರಿಹಾರ ನೀಡಲಾಗಿದೆಯೇ; | ಕಳೆದ 3 ವರ್ಷದಲ್ಲಿ ಆನೆ ದಾಳಿಯಿಂದ ಉಂಟಾದ ಮಾನವ ಪ್ರಾಣ ಹಾನಿ ಪ್ರಕರಣಗಳು ಹಾಗೂ ಆನೆ ಒಳಗೊಂಡಂತೆ ಇತರ ವನ್ಯಪ್ರಾಣಿಗಳಿಂದ ಉಂಟಾದ ಬೆಳೆಹಾನಿ ಪ್ರಕರಣ ಹಾಗೂ ಪಾವತಿಸಿದ ದಯಾತ್ಮಕ ಧನದ ವಿವರ ಈ ಕೆಳಕಂಡಂತಿದೆ. (ರೂ.ಗಳಲ್ಲಿ) |

| ವರ್ಷ | ಮಾನವ ಪ್ರಾಣ ಹಾನಿ | | ಬೆಳೆನಾಶ | |
|---|---|---|---|---|
| | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ |
| 2016-17 | 48 | 240,00,000.00 | 18985 | 7,05,67,426.00 |
| 2017-18 | 35 | 175,00,000.00 | 27525 | 13,69,16,590.00 |
| 2018-19 | 26 | 130,00,000.00 | 19913 | 10,28,13,410.00 |
| 2019-20 (ಡಿಸೆಂಬರ್-19ರ ವರೆಗೆ) | 34 | 177,50,000.00 | 7524 | 5,21,02,865.00 |

| ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಕಾಡು ಪ್ರಾಣಿ ಮತ್ತು ಮಾನವನ ಮಧ್ಯೆ ಉಂಟಾಗುವ ಸಂಘರ್ಷಗಳನ್ನು ತಪ್ಪಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಯೋಜನೆಗಳೇನು; ಇವುಗಳನ್ನು ಎಷ್ಟರ ಮಟ್ಟಿಗೆ ಅನುಷ್ಠಾನಗೊಳಿಸಲಾಗಿದೆ? (ವಿವರ ನೀಡುವುದು) | ವನ್ಯಪ್ರಾಣಿ ಮತ್ತು ಮಾನವನ ಮಧ್ಯೆ ಉಂಟಾಗುವ ಸಂಘರ್ಷಗಳನ್ನು ತಪ್ಪಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿವೆ. |

| ಕ್ರ. ಸಂ. | ಲೆಕ್ಕಶೀರ್ಷಿಕೆ |
|---|---|
| | **ರಾಜ್ಯವಲಯ ಯೋಜನೆಗಳು** |
| 1 | 2406-02-110-0-54-ಪ್ರಾಕೃತಿಕ ವನ್ಯಜೀವಿ ಸಂರಕ್ಷಣೆ, ವನ್ಯಜೀವಿ ಆವಾಸಸ್ಥಾನಗಳ ನಿರ್ವಹಣೆ, ಮಾನವ-ವನ್ಯಪ್ರಾಣಿ ಸಂಘರ್ಷ ನಿಯಂತ್ರಣ-139-ಪ್ರಧಾನ ಕಾಮಗಾರಿಗಳು |
| 2 | 4406-01-101-0-01-ಉಪಯೋಗಿತ ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣದಿಂದ ಮಾನವ-ವನ್ಯ ಪ್ರಾಣಿ ಸಂಘರ್ಷ ನಿಯಂತ್ರಣ-132-ಬಂಡವಾಳ ವೆಚ್ಚಗಳು |
| | **ಕೇಂದ್ರ ಪುರಸ್ಕೃತ ಯೋಜನೆಗಳು** |
| 1 | 2406-02-110-0-02-ಹುಲಿ ಯೋಜನೆ-139-ಪ್ರಧಾನ ಕಾಮಗಾರಿಗಳು |
| 2 | 2406-02-110-0-23 ಆನೆ ಯೋಜನೆ |
| 3 | 2406-02-110-0-47 ಕೇಂದ್ರ ಪುರಸ್ಕೃತ ಸಮಗ್ರ ವನ್ಯಜೀವಿ ಆವಾಸ ಸ್ಥಾನಗಳ ಅಭಿವೃದ್ಧಿ- 139-ಪ್ರಧಾನ ಕಾಮಗಾರಿಗಳು |

| | | |
|---|---|---|
| | | ಮೇಲ್ಕಂಡ ಯೋಜನೆಗಳ ಅನುಷ್ಠಾನದಿಂದಾಗಿ ರಾಜ್ಯದಲ್ಲಿ ವನ್ಯಪ್ರಾಣಿ ಮತ್ತು ಮಾನವನ ಮಧ್ಯೆ ಉಂಟಾಗುವ ಸಂಘರ್ಷಗಳನ್ನು ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳುವ ಮುಖಾಂತರ ತಡೆಯಲಾಗುತ್ತಿದೆ.<br><br>1) ಸೌರಶಕ್ತಿ ಬೇಲಿ ನಿರ್ಮಾಣ/ ನಿರ್ವಹಣೆ.<br>2) ಆನೆ ತಡೆ ಕಂದಕ ನಿರ್ಮಾಣ/ನಿರ್ವಹಣೆ.<br>3) ವನ್ಯಪ್ರಾಣಿಗಳಿಗೆ ಕುಡಿಯುವ ನೀರಿಗಾಗಿ ಕೆರೆಗಳ ನಿರ್ಮಾಣ/ನಿರ್ವಹಣೆ.<br>4) ಬೇಟೆ ತಡೆ ಶಿಬಿರ ಹಾಗೂ ಕ್ಷಿಪ್ರ ಸ್ಪಂದನ ಪಡೆ (Rapid Response Teams) ತಂಡಗಳಿಗೆ ನಿಸ್ತಂತು ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>5) ವನ್ಯಪ್ರಾಣಿಗಳ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>6) ವನ್ಯಪ್ರಾಣಿಗಳ ಚಲನ-ವಲನದ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>7) ಕಾಡಾನೆ ಹಾವಳಿ ಹೆಚ್ಚಾಗಿರುವ ಪ್ರದೇಶಗಳಲ್ಲಿ ಆನೆ ಗುಂಪುಗಳ ಒಂದೊಂದು ಗುಂಪಿನ ಒಂದು ವಯಸ್ಕ ಹೆಣ್ಣಾನೆಗೆ ರೇಡಿಯೋ ಕಾಲರ್ ಅಳವಡಿಸಿ, 24 ಗಂಟೆ ಆನೆ ಹಿಂಡಿನ ಚಲನ-ವಲನಗಳ ಮೇಲೆ ನಿಗಾ ವಹಿಸಿ, ಸದರಿ ಆನೆಗಳು ಯಾವ ಯಾವ ಪ್ರದೇಶಗಳಲ್ಲಿ ಚಲಿಸುತ್ತಿವೆ ಎಂಬ ವಿಷಯವನ್ನು ಎಸ್.ಎಂ.ಎಸ್. ಮುಖಾಂತರ ಸ್ಥಳೀಯ ಜನರಿಗೆ ಆಗಿಂದಾಗ್ಗೆ ಮಾಹಿತಿ ನೀಡಲಾಗುತ್ತಿದೆ.<br>8) ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಕಾಡಾನೆಗಳನ್ನು ಸೆರೆಹಿಡಿದು ಆಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿರುತ್ತದೆ.<br>9) ರೈತರಿಗೆ ಸೋಲಾರ್ ಬೇಲಿ ನಿರ್ಮಾಣಕ್ಕೆ ಶೇ 50ರಷ್ಟು ಧನ ಸಹಾಯವನ್ನು ಇಲಾಖೆಯಿಂದ ನೀಡಲಾಗುತ್ತಿದೆ. |

ಸಂಖ್ಯೆ: ಅಪಜೀ 35 ಎಫ್ ಡಬ್ಲ್ಯೂ ಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು